# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 134

ಸದಸ್ಯರ ಹೆಸರು : ಶ್ರೀ ಕೆ.ಟಿ. ಶ್ರೀಕಂಠೇಗೌಡ (ಪದವೀಧರರ ಕ್ಷೇತ್ರ)

ಉತ್ತರಿಸಬೇಕಾದ ದಿನಾಂಕ : 14.09.2021

ಉತ್ತರಿಸುವವರು : ಗಣಿ ಮತ್ತು ಭೂವಿಜ್ಞಾನ ಮತ್ತು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರೀಕರ ಸಬಲೀಕರಣ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಕಳೆದ ಐದು ವರ್ಷಗಳಿಂದ (2016-2021) ವಸೂಲಾತಿಯಾಗಿರುವ ಅದಿರಿನ ಮೇಲಿನ ಸೆಸ್ ಎಷ್ಟು; (ಜಿಲ್ಲಾವಾರು ವಿವರ ನೀಡುವುದು) | ಇಲಾಖೆಯಲ್ಲಿ ಅದಿರಿನ ಮೇಲೆ ಯಾವುದೇ ಸೆಸ್ ಸಂಗ್ರಹಿಸುತ್ತಿಲ್ಲ. ಆದಾಗ್ಯೂ ಗಣಿಗುತ್ತಿಗೆಗೆ ಸಂಬಂಧಿಸಿದಂತೆ ಎಂ.ಎಂ.ಡಿ.ಆರ್. ತಿದ್ದುಪಡಿ ಕಾಯ್ದೆ - 2015 ದಿನಾಂಕ: 12.01.2015ರಂತೆ, ದಿನಾಂಕ:12.01.2015ರ ಪೂರ್ವದಲ್ಲಿ ಮಂಜೂರಾದ ಗಣಿಗುತ್ತಿಗಳಿಂದ ರಾಜಧನದ ಮೇಲೆ ಶೇ.30 ರಷ್ಟು ಹಾಗೂ ದಿನಾಂಕ:12.01.2015 ನಂತರ ಹರಾಜು ಮೂಲಕ ಮಂಜೂರಾದ ಗಣಿಗುತ್ತಿಗೆಗಳಿಂದ ರಾಜಧನದ ಮೇಲೆ ಶೇ.10 ರಷ್ಟು ಜಿಲ್ಲಾ ಖನಿಜ ಪ್ರತಿಷ್ಠಾನ ನಿಧಿ ಸಂಗ್ರಹಿಸಲಾಗುತ್ತಿದೆ.<br><br>ಕಲ್ಲು ಗಣಿಗುತ್ತಿಗೆಗೆ ಸಂಬಂಧಿಸಿದಂತೆ ಕೆ.ಎಂ.ಎಂ.ಸಿ.ಆರ್. ತಿದ್ದುಪಡಿ ನಿಯಮ-2016 ದಿನಾಂಕ:12.08.2016ರನ್ವಯ ದಿನಾಂಕ:12.08.2016 ಪೂರ್ವದಲ್ಲಿ ಮಂಜೂರಾದ ಕಲ್ಲು ಗಣಿಗುತ್ತಿಗೆದಾರರಿಂದ ರಾಜಧನದ ಮೇಲೆ ಶೇ.30 ರಷ್ಟು ಹಾಗೂ ದಿನಾಂಕ:12.08.2016ರ ನಂತರ ಹರಾಜು ಮೂಲಕ ಮಂಜೂರು ಮಾಡಲಾದ ಕಲ್ಲು ಗಣಿಗುತ್ತಿಗೆದಾರಿಂದ ರಾಜಧನದ ಮೇಲೆ ಶೇ.10 ರಷ್ಟು ಜಿಲ್ಲಾ ಖನಿಜ ಪ್ರತಿಷ್ಠಾನ ನಿಧಿಯನ್ನುಸಂಗ್ರಹಿಸಲಾಗುತ್ತಿದೆ.<br><br>ರಾಜ್ಯದಲ್ಲಿ 2015-16 ರಿಂದ 2021-22 (ಜುಲೈ-2021) ಅಂತ್ಯದವರೆಗೆ ಅದಿರು ಖನಿಜದ ಮೇಲೆ ರೂ.1882.40 ಕೋಟಿ ಹಾಗೂ ಇತರೇ ಎಲ್ಲಾ ಖನಿಜಗಳಿಂದ ರೂ.902.24 ಕೋಟಿ ಒಟ್ಟು ರೂ.2784.65 ಕೋಟಿ ಸಂಗ್ರಹಿಸಲಾಗಿದೆ. ಜಿಲ್ಲಾವಾರು ವಿವರ ಅನುಬಂಧರಲ್ಲಿ ನೀಡಲಾಗಿದೆ. |
| ಆ) | ಈ ಹಣವನ್ನು ಯಾವ ಯೋಜನೆಗಳಿಗೆ ಖರ್ಚು ಮಾಡುವ ಅವಕಾಶ ಇದೆ; | DMFT-2016ರ ನಿಯಮ 18(2)ರಂತೆ ಡಿಎಂಎಫ್ ನಿಧಿಯಲ್ಲಿ ಸಂಗ್ರಹಿಸಿದ ಒಟ್ಟು ಮೊತ್ತದಲ್ಲಿ ಶೇ.10 ಎಂಡೋಮೆಂಟ್‌ಗಾಗಿ ಹಾಗೂ ಶೇ.5 ಆಡಳಿತಾತ್ಮಕ ವೆಚ್ಚಕ್ಕಾಗಿ ಉಳಿದ ಶೇ.85 ರಲ್ಲಿ 60:40 ಅನುಪಾತದಂತೆ ಗಣಿಬಾಧಿತ ಪ್ರದೇಶಗಳಲ್ಲಿ ಈ ಕೆಳಕಂಡ ಅಭಿವೃದ್ಧಿ ಕಾರ್ಯಗಳಿಗೆ ವಿನಿಯೋಗಿಸುವುದು ಮುಖ್ಯ ಉದ್ದೇಶವಾಗಿರುತ್ತದೆ.<br><br>**<u>ಶೇಕಡ 60ರ ಅನುಪಾತದಲ್ಲಿ ಆಯೋಜಿಸುವ ಕಾರ್ಯಕ್ರಮಗಳು:</u>**<br>1) ಕುಡಿಯುವ ನೀರು<br>2) ಪರಿಸರ ಸಂರಕ್ಷಣೆ ಮತ್ತು ಮಾಲಿನ್ಯ ನಿಯಂತ್ರಣದ ಅಳತೆ<br>3) ಆರೋಗ್ಯ<br>4) ಶಿಕ್ಷಣ<br>5) ಮಹಿಳಾ ಮತ್ತು ಮಕ್ಕಳ ಕಲ್ಯಾಣ ಸಂಬಂಧ ಕಾರ್ಯಕ್ರಮ<br>6) ಹಿರಿಯ ನಾಗರೀಕರ ಮತ್ತು ವಿಕಲಚೇತನರ ಕಲ್ಯಾಣ |

....2.

| | | |
|---|---|---|
| | | 7) ಕೌಶಲ್ಯಾಭಿವೃದ್ಧಿ<br>8) ನೈರ್ಮಲ್ಯತೆ<br>**<u>ಶೇಕಡ 40ರ ಅನುಪಾತದಲ್ಲಿ ಆಯೋಜಿಸುವ ಕಾರ್ಯಕ್ರಮಗಳು:</u>**<br>1) ಮೂಲಭೂತ ಸೌಕರ್ಯ<br>2) ನೀರಾವರಿ<br>3) ಇಂಧನ ಮತ್ತು ಜಲ ಸಂಪನ್ಮೂಲ ಅಭಿವೃದ್ಧಿ<br>4) ಗಣಿಗಾರಿಕೆ ಜಿಲ್ಲೆಗಳಲ್ಲಿ ಪರಿಸರದ ಗುಣಮಟ್ಟ ಹೆಚ್ಚಿಸುವುದು |
| ಇ) | ಇದರಲ್ಲಿ ಖರ್ಚಾದ ಅನುದಾನವೆಷ್ಟು: ಬಾಕಿ ಇರುವ ಅನುದಾನವೆಷ್ಟು: | ಜಿಲ್ಲಾ ಖನಿಜ ಪ್ರತಿಷ್ಠಾನ ಟ್ರಸ್ಟನಲ್ಲಿ ಸಂಗ್ರಹಿಸಿದ ಮೊತ್ತದಲ್ಲಿ ಖರ್ಚಾದ ಹಣದ ವಿವರ ಹಾಗೂ ಉಳಿದಿರುವ ಮೊತ್ತದ ವಿವರ ಅನುಬಂಧದಲ್ಲಿ ನೀಡಲಾಗಿದೆ. |
| ಈ) | ಉಳಿದಿರುವ ಹಣ ಖರ್ಚು ಮಾಡಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು ? (ವಿವರ ನೀಡುವುದು) | ಸರ್ಕಾರದ ಮುಖ್ಯ ಕಾರ್ಯದರ್ಶಿರವರ ಅಧ್ಯಕ್ಷತೆಯಲ್ಲಿ ಡಿಎಂಎಫ್ ಮೊತ್ತ ಅಧಿಕ ಸಂಗ್ರಹವಿರುವ ಆಯ್ದ ಜಿಲ್ಲೆಗಳ ಜಿಲ್ಲಾಧಿಕಾರಿಗಳೊಂದಿಗೆ ಹಾಗೂ ಜಿಲ್ಲಾ ಉನ್ನತಾಧಿಕಾರಸ್ಥ ಸಮಿತಿ ಸಭೆಯಲ್ಲಿ ಪ್ರಧಾನ ಮಂತ್ರಿ ಖನಿಜ ಕ್ಷೇತ್ರ ಕಲ್ಯಾಣ ಯೋಜನೆಗಳನ್ನು (PMKKKY) ಕೈಗೊಳ್ಳುವ ಸಂಬಂಧಪಟ್ಟ ಇಲಾಖೆಗಳ ಕಾರ್ಯದರ್ಶಿರವರುಗಳೊಂದಿಗೆ ಸಭೆ ನಡೆಸಿ ಡಿಎಂಎಫ್ ಪ್ರಗತಿ ಸಾಧಿಸಲು ಪರಿಶೀಲನೆ ನಡೆಸಲಾಗುತ್ತದೆ.<br><br>ಸರ್ಕಾರದ ಕಾರ್ಯದರ್ಶಿಗಳು ಹಾಗೂ ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ ರವರು 30 ಜಿಲ್ಲೆಗಳ ಜಿಲ್ಲಾಧಿಕಾರಿಗಳು ಹಾಗೂ ಉಪ ನಿರ್ದೇಶಕರು/ಹಿರಿಯ ಭೂವಿಜ್ಞಾನಿರವರೊಂಧಿಗೆ ಮಾಸಿಕ ಸಭೆಗಳನ್ನು ನಡೆಸಿ ಸಂಬಂಧಿಸಿದ ಜಿಲ್ಲೆಯಲ್ಲಿ ರೂಪಿಸಲಾಗುವ ಕಾರ್ಯಕ್ರಮಗಳಿಗೆ ಆಧ್ಯತೆ ಮೇರೆಗೆ ಪ್ರಗತಿಯನ್ನು ಸಾಧಿಸಲು ಸೂಚನೆಗಳನ್ನು ನೀಡಲಾಗಿರುತ್ತದೆ. ಅದರಂತೆ ಡಿಎಂಎಫ್ ಅಡಿಯಲ್ಲಿ ಒಟ್ಟು 7903 ಕಾಮಗಾರಿಗಳನ್ನು ಕೈಗೊಂಡಿದ್ದು, ಈವರೆಗೆ 2292 ಕಾಮಗಾರಿಗಳು ಯಶಸ್ವಿಯಾಗಿ ಪೂರ್ಣಗೊಂಡಿರುತ್ತವೆ. ಉಳಿದ ಕಾಮಗಾರಿಗಳು ಪ್ರಗತಿಯಲ್ಲಿರುತ್ತದೆ. |

**ಸಂಖ್ಯೆ: ಸಿಐ 129 ಎಂಎಂಎಂ 2021**

(ಆಚಾರ್ ಹಾಲಪ್ಪ ಬಸಪ್ಪ)
ಗಣಿ ಮತ್ತು ಭೂವಿಜ್ಞಾನ ಮತ್ತು ಮಹಿಳಾ
ಮತ್ತು ಮಕ್ಕಳ ಅಭಿವೃದ್ಧಿ, ವಿಕಲಚೇತನರ
ಮತ್ತು ಹಿರಿಯ ನಾಗರೀಕರ ಸಬಲೀಕರಣ ಸಚಿವರು

**<u>ಮಾನ್ಯ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ. ಕೆ.ಟಿ. ಶ್ರೀಕಂಟೇಗೌಡ (ಪದವೀಧರರ ಕ್ಷೇತ್ರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:(134)ರ ಉತ್ತರಕ್ಕೆ ಅನುಬಂಧ</u>**

**ಜಿಲ್ಲಾ ಖನಿಜ ಪ್ರತಿಷ್ಠಾನ ಟ್ರಸ್ಟ್ ಅಡಿಯಲ್ಲಿ 2015-16 ರಿಂದ 2021-22 (ಜುಲೈ-2021) ರವರೆಗೆ ಅದಿರು ಮತ್ತು ಇತರೇ ಖನಿಜಗಳಿಂದ ಸಂಗ್ರಹಿಸಿದ ಡಿಎಂಎಫ್ ಮೊತ್ತದ ವಿವರ**

| Sl.No. | District | Iron Ore Mineral | Other Minerals | DMF Collection from 2015-16 to July 2021 | 85% DMF Available Amount (Excluding endowment and Administration amount) | Approved Action plan Amount | Amount Spent | Covid - 19Amount spent | Balance Amount (in Lakhs) |
|---|---|---|---|---|---|---|---|---|---|
| 1 | Ballari | 162043.40 | 3740.89 | 165784.29 | 140916.65 | 222215.50 | 49677.67 | 3225.00 | 88013.98 |
| 2 | Kalaburagi | 0.00 | 37219.88 | 37219.88 | 31636.90 | 54084.42 | 9151.39 | 5852.00 | 16633.51 |
| 3 | Chitradurga | 25256.19 | 729.04 | 25985.23 | 22087.45 | 30639.65 | 9234.96 | 2932.00 | 9920.49 |
| 4 | Bagalkot | 914.81 | 6839.26 | 7754.07 | 6590.96 | 11410.20 | 3538.24 | 386.00 | 2666.72 |
| 5 | Koppal | 0.00 | 5291.66 | 5291.66 | 4497.91 | 8512.12 | 3426.96 | 543.00 | 527.95 |
| 6 | Raichur | 0.00 | 4279.50 | 4279.50 | 3637.58 | 7023.41 | 2903.33 | 387.00 | 347.25 |
| 7 | Chikkaballapur | 0.00 | 3845.91 | 3845.91 | 3269.03 | 6672.24 | 974.14 | 379.00 | 1915.89 |
| 8 | Ramanagara | 0.00 | 3764.60 | 3764.60 | 3199.91 | 2750.56 | 1630.97 | 490.00 | 1078.94 |
| 9 | Bangalore Urban | 0.00 | 3478.06 | 3478.06 | 2956.35 | 6354.13 | 1629.21 | 194.56 | 1132.58 |
| 10 | Tumakuru | 4.38 | 3290.85 | 3295.23 | 2800.94 | 4995.63 | 1738.92 | 230.00 | 832.02 |
| 11 | Bangalore Rural | 0.00 | 2722.26 | 2722.26 | 2313.92 | 144.50 | 50.50 | 161.00 | 2102.42 |
| 12 | Belgaum | 0.00 | 2540.88 | 2540.88 | 2159.75 | 1791.68 | 1567.50 | 126.00 | 466.26 |
| 13 | Chamarajanagar | 0.00 | 2309.01 | 2309.01 | 1962.65 | 2201.97 | 304.74 | 297.00 | 1360.92 |
| 14 | Hassan | 0.00 | 1201.64 | 1299.43 | 1104.52 | 653.63 | 558.38 | 15.00 | 531.14 |
| 15 | Uttara Kannada | 0.00 | 1299.43 | 1201.64 | 1021.39 | 761.63 | 680.99 | 25.00 | 315.40 |
| 16 | Dakshina Kannada | 0.00 | 950.79 | 950.79 | 808.17 | 165.50 | 126.49 | 152.00 | 529.69 |
| 17 | Udupi | 0.00 | 873.78 | 873.78 | 742.72 | 446.07 | 411.58 | 112.76 | 218.38 |
| 18 | Chikmagalur | 0.00 | 867.31 | 867.31 | 737.21 | 665.24 | 486.88 | 0.00 | 250.33 |
| 19 | Kolar | 0.38 | 862.55 | 862.94 | 733.49 | 161.81 | 66.19 | 0.00 | 667.30 |
| 20 | Gadag | 0.00 | 677.23 | 677.23 | 575.65 | 494.32 | 139.39 | 60.00 | 376.26 |
| 21 | Dharwad | 0.00 | 648.91 | 648.91 | 551.57 | 265.40 | 52.66 | 100.00 | 398.91 |
| 22 | Haveri | 0.00 | 593.66 | 593.66 | 504.61 | 788.01 | 169.60 | 93.71 | 241.31 |
| 23 | Mandya | 0.00 | 482.01 | 511.08 | 434.42 | 359.50 | 0.00 | 24.00 | 410.42 |
| 24 | Davanagere | 0.12 | 447.59 | 482.13 | 409.81 | 532.43 | 398.94 | 16.00 | -5.13 |
| 25 | Vijayapura | 0.00 | 511.08 | 447.59 | 380.45 | 410.22 | 108.37 | 54.50 | 217.58 |
| 26 | Shivamogga | 21.60 | 212.64 | 234.24 | 199.10 | 56.94 | 27.36 | 39.00 | 132.74 |
| 27 | Mysuru | 0.00 | 188.36 | 188.36 | 160.11 | 177.19 | 9.44 | 23.00 | 127.67 |
| 28 | Bidar | 0.00 | 126.47 | 126.47 | 107.50 | 47.77 | 0.00 | 10.08 | 97.42 |
| 29 | Kodagu | 0.00 | 116.73 | 116.73 | 99.22 | 14.50 | 0.00 | 18.00 | 81.22 |
| 30 | Yadgir | 0.00 | 112.49 | 112.49 | 95.62 | 36.97 | 29.41 | 0.00 | 66.20 |
| | **Total** | **188240.88** | **90224.48** | **278465.36** | **236695.55** | **364833.14** | **89094.19** | **15945.61** | **131655.75** |